ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಮಂಗಳವಾರ, ದಿನಾಂಕ : 23ನೇ ಜುಲೈ, 2019

ರಾಜ್ಯದ ವಿವಿಧ ವಿಶ್ವವಿದ್ಯಾಲಯಗಳಲ್ಲಿ "ವೃತ್ತಿ ಮಾರ್ಗದರ್ಶನ ಸೇವಾ ನಿಧಿ" ಹೆಸರಿನಲ್ಲಿ ಹಣ ವಸೂಲಿ ಮಾಡುತ್ತಿರುವ ಕುರಿತು

ಶ್ರೀ ಎಸ್.ವ್ಹಿ. ಸಂಕನೂರ (ಪದವೀಧರರ ಕ್ಷೇತ್ರ) :-

539 (715) ಮಾನ್ಯ ಉನ್ನತ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದ ಮೈಸೂರು, ಬೆಂಗಳೂರು ಕರ್ನಾಟಕ ಗುಲ್ಬರ್ಗಾ, ಶಿವಮೊಗ್ಗ ರಾಣಿ ಚೆನ್ನಮ್ಮ ಮುಂತಾದ ವಿಶ್ವವಿದ್ಯಾಲಯಗಳಲ್ಲಿ ಪದವಿ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಂದ "ವೃತ್ತಿ ಮಾರ್ಗದರ್ಶನ ಸೇವಾ ನಿಧಿ" (Career Guidance Service fund) ಎಂಬ ಹೆಸರಿನ ಹಣ ವಸೂಲಿ ಮಾಡಲಾಗುತ್ತಿದೆಯೇ ; ಹಾಗಿದ್ದಲ್ಲಿ, ಪ್ರತಿ ವಿದ್ಯಾರ್ಥಿಯಿಂದ ಎಷ್ಟು ಹಣ ವಸೂಲಿ ಮಾಡಲಾಗುತ್ತಿದೆ ;

(ಆ) ಕಳೆದ 5 ವರ್ಷಗಳಲ್ಲಿ ಪ್ರತಿ ವಿಶ್ವವಿದ್ಯಾಲಯದಲ್ಲಿ ಈ ರೀತಿ ಸಂಗ್ರಹ ಮಾಡಿದ ಒಟ್ಟು ಹಣ ಎಷ್ಟು ; (ವಿಶ್ವವಿದ್ಯಾಲಯವಾರು ಮಾಹಿತಿ ನೀಡುವುದು)

(ಇ) ಹೀಗೆ ಸಂಗ್ರಹವಾದ ಹಣದಲ್ಲಿ ಪ್ರತಿ ವಿಶ್ವವಿದ್ಯಾಲಯದವರು ವಿದ್ಯಾರ್ಥಿಗಳಿಗೆ ವೃತ್ತಿ ತರಬೇತಿ ನೀಡಲು ಎಷ್ಟು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವರು ; ಇದಕ್ಕೆ ಖರ್ಚಾದ ಹಣವೆಷ್ಟು ? (ಈ ಕುರಿತು ಪ್ರತಿ ವಿಶ್ವವಿದ್ಯಾಲಯವಾರು ಮಾಹಿತಿ ನೀಡುವುದು)